ಡಾ॥ ಜಿ. ಎಸ್. ದೀಕ್ಷಿತ್

# ಉಲ್ಲೇಖನೀಯ ಆಕರ ಗ್ರಂಥ ಚಾವುಂಡರಾಯನ 'ಲೋಕೋಪಕಾರ'

ಚಾವುಂಡರಾಯನ ಲೋಕೋಪಕಾರ ನಮ್ಮ ಜನಕ್ಕೆ ಪರಿಚಯವಾದ ಬಗೆಗೆ ಒಂದೆರಡು ಮಾತು ಅವಶ್ಯ. ಇಂತಹ ಗ್ರಂಥವೊಂದಿದೆಯೆಂದು ಮೊದಲು ಪರಿಚಯಿಸಿದವರು ಕವಿಚರಿತೆಕಾರರು. ಅವರಿಗೆ ಸಮಗ್ರ ಪ್ರತಿ ದೊರೆತಿರಲಿಲ್ಲ. ಕಾಲವನ್ನು ೧೧೦೦ ಎಂದಿದ್ದರು. ಡಾ॥ ಅನಂತರಂಗಾಚಾರರು ಸುಮಾರು ೪೦ ವರ್ಷದ ಹಿಂದೆ ಪ್ರಬುದ್ಧ ಕರ್ಣಾಟಕದ ೧೮ನೆಯ ಸಂಪುಟದಲ್ಲಿ ಒಂದು ಲೇಖನ ಬರೆದು ಇದರ ಮಹತ್ವವನ್ನು ಕನ್ನಡಿಗರಿಗೆ ಮೊದಲು ಮಾಡಿಕೊಟ್ಟರು. ನಂತರ ೧೯೫೦ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಶ್ರೀ ಎಚ್. ಶೇಷ ಅಯ್ಯಂಗಾರರು ನಾಲ್ಕು ಹಸ್ತಪ್ರತಿಗಳ ಸಹಾಯದಿಂದ ಈ ಗ್ರಂಥವನ್ನು ಸಂಪಾದಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ.

೧೧ನೆಯ ಶತಮಾನದ ಸಾಹಿತ್ಯ: ಹನ್ನೊಂದನೆಯ ಶತಮಾನದ ಎಲ್ಲ ಕವಿಗಳು ಹೊಸ ರೀತಿಯ ಗ್ರಂಥಗಳನ್ನು ಬರೆದಿರುವರು. ೧೦ನೆಯ ಶತಮಾನದಲ್ಲಿ ಪಂಪ, ರನ್ನ, ಪೊನ್ನರು ಪುರಾಣಗಳನ್ನು, ಮಹಾಕಾವ್ಯಗಳನ್ನು ಬರೆದಂತೆ ಈ ಕಾಲದ ಕವಿಗಳು ಶಾಸ್ತ್ರೀಯ ಗ್ರಂಥಗಳನ್ನು ಬರೆದಿರುವರು. ಈ ಶತಮಾನದ ಆದಿಯಲ್ಲಿ ಚಾವುಂಡರಾಯ 'ಲೋಕೋಪಕಾರ' ಬರೆದ. ಇವನ ಕಾಲದಲ್ಲಿಯೇ ಚಂದ್ರರಾಜನು ಕಾಮಶಾಸ್ತ್ರದ ಮೇಲೆ 'ಮದನ ತಿಲಕ' ಎನ್ನುವ ಗ್ರಂಥವನ್ನು, ದುರ್ಗಸಿಂಹ ಇದೇ ಕಾಲಕ್ಕೆ (೧೦೩೧) ಪಂಚತಂತ್ರವನ್ನು ಬರೆದು ಲೌಕಿಕ ಧರ್ಮವನ್ನು, ನೀತಿಸಾರವನ್ನು ತೋರಿಸಲು ಪ್ರಯತ್ನಿಸಿದ್ದಾನೆ. ೧೦೪೯ರಲ್ಲಿ ಶ್ರೀಧರಾಚಾರ್ಯ ಜ್ಯೋತಿಷ್ಯಶಾಸ್ತ್ರವನ್ನು ಬರೆದ. ಇವೆಲ್ಲವುಗಳ ನಂತರ 'ಮಾನಸೋಲ್ಲಾಸ'ವನ್ನು ३ನೇ ಸೋಮೇಶ್ವರ ೧೨ನೆಯ ಶತಮಾನದ ಆದಿಯಲ್ಲಿ ಬರೆದ. ಇದು ಸಂಸ್ಕೃತ ಕೃತಿ.

ಇನ್ನು 'ಲೋಕೋಪಕಾರ'ದ ಕರ್ತೃವಿನ ವಿಷಯ ತಿಳಿದುಕೊಳ್ಳೋಣ. ಚಾವುಂಡರಾಯನು ತನ್ನ ವಿಷಯವನ್ನೂ ತನ್ನ ಮನೆತನದ ವಿಷಯವನ್ನೂ ಗ್ರಂಥ ಬರೆದ ಇಸ್ವಿಯನ್ನೂ ಹೇಳಿರುವುದರಿಂದ ಇಂಥ ವಿಷಯಗಳ ಬಗ್ಗೆ, ಇತರ ಲೇಖಕರ ಬಗ್ಗೆ ಇರುವ ಊಹಾಪೋಹಗಳು ಇವನ ಬಗ್ಗೆ ಇಲ್ಲದಿರುವುದು ನಮ್ಮ ಸುಕೃತ. ಈತ ಎರಡನೆಯ ಜಯಸಿಂಹನ ಕಾಲದಲ್ಲಿದ್ದು (೧೦೨೦–೪೫) ಅವನಿಂದ ಪೋಷಿತನಾಗಿದ್ದ. ಚಾವುಂಡರಾಯನ ಕಾಲ ೧೦೨೫ರ ಹತ್ತಿರವಿತ್ತು ಎನ್ನುವ ಬಗ್ಗೆ ಯಾವ ಸಂಶಯವೂ ಇಲ್ಲ. ಇವನು ವೈದಿಕ ಮತದ ಅದ್ವೈತಿಗಳ ಪಂಗಡಕ್ಕೆ ಸೇರಿದ ಬ್ರಾಹ್ಮಣ. ಈತನ ಊರು ಮುದಗಲ್. ಆ ಊರಿನಲ್ಲಿ ಕಾಶ್ಯಪ ಗೋತ್ರದ ಶಂಕರಭಟ್ಟರೆಂಬವರ ಮಗ ಪಂಗೌಂಡಭಟ್ಟನೆಂಬ ಪಂಡಿತನಿದ್ದ. ಇವನು ಅಪರಿಮಿತ ದಾನಿ. ಚಾಲುಕ್ಯ ರಾಜಪೋಷಿತ. ಹಲವು ಕೆರೆಗಳ ನಿರ್ಮಾತೃ; ಕವಿ ಕಲ್ಪವೃಕ್ಷ; ವಿದ್ವಜ್ಜನ ರತ್ನ; ವಿದ್ವತ್ಪಕ್ಷಪಾತಿ; ಕಾವ್ಯಗಳನ್ನು ರಚಿಸಿ 'ಕವಿತಾ ವಿಳಾಸ'ನೆಂಬ ಬಿರುದು ಪಡೆದಿದ್ದ. ಈತನ ಕಾವ್ಯಗಳಾವುವೂ ಸಿಕ್ಕಿಲ್ಲ. ಆದರೆ ದುರ್ಗಸಿಂಹನೆಂಬುವನು ೧೦೩೧ರಲ್ಲಿ ತನ್ನ 'ಪಂಚತಂತ್ರ'ದಲ್ಲಿ ಈ ಕವಿತಾ ವಿಳಾಸನನ್ನು ತನ್ನ ಸರ್ವ ಕವಿಗಳ ಪೈಕಿ ಸೇರಿಸಿ ಹೊಗಳಿದ್ದಾನೆ.

ಈತನ ಹೆಂಡತಿ ಮಲ್ಲಿಕಬ್ಬೆ. ಇವರ ಸುಪುತ್ರ ಚಾವುಂಡ ರಾಯ. ಜಯಸಿಂಹಚಕ್ರಿ ಈತನನ್ನು ಸರ್ವಾಧಿಕಾರಿಯ ನ್ನಾಗಿ ಮಾಡಿ 'ಮಹಾಬಳಿ' ಎಂಬ ಗ್ರಾಮವನ್ನು ದಾನ ಮಾಡಿದ. ಚಾವುಂಡರಾಯನು ಹಾಕಿಸಿದ ತೋಪುಗಳು, ಕಟ್ಟಿಸಿದ ದೇವಸ್ಥಾನಗಳು, ತೋಡಿಸಿದ ಕೆರೆ ಕಟ್ಟೆ ಬಾವಿ ಅಸಂಖ್ಯಾತವಾದುದರಿಂದ ಈತನಿಗೆ ಧರ್ಮ ಧರ್ಮಾತ್ಮಜ ನೆನ್ನುವ ಬಿರುದನ್ನು ತಂದವು. 'ಕವಿತಾ ವಿಳಾಸ'ನ ಮಗ ನಾದ ಇವನಿಗೆ 'ಕಾವ್ಯ ವಿಳಾಸ'ವೆಂಬ ಬಿರುದು ಒಪ್ಪ ತಕ್ಕದ್ದು. ಇವನು ಕೇಳುತ್ತಾನೆ: "ಕೇವಲ ಛಂದಸ್ಸಿನಿಂದ, ಮಾತ್ರಾಪದಗಳಿಂದ ತುಂಬಿರುವ ಕಾವ್ಯಗಳಿಂದ ಏನು ಪ್ರಯೋಜನ?" ಹೀಗೆಂದು ತನ್ನ ಗ್ರಂಥದಲ್ಲಿ ತಾನು ಏನು ಮಾಡಿದ್ದೇನೆಂದು ಹೇಳುತ್ತಾನೆ.

"ನನ್ನ ಗ್ರಂಥವಾದರೋ ಛಂದಸ್ಸಿನಲ್ಲಿಯೂ ಶಾಸ್ತ್ರದ ಕವಿತ್ವದ ಬೆಡಗಿನಲ್ಲಿಯೂ ಶೋಭಿಸುತ್ತಿರುವುದು. ಹಲವು ಲೌಕಿಕ ಶಾಸ್ತ್ರಗಳನ್ನೊಳಗೊಂಡಿರುವ ಈ ಲೋಕೋಪಕಾರವು ಜಗತ್ತಿಲಕವೆನಿಸಿ ರಾಜಪೂಜಿತವೂ ಆಗಿರುವುದು." ಈ ಗ್ರಂಥವು ಈ ಮೇದಿನಿಯ ಜನರಿಗೆ ಹಲವು ಬಗೆಯಿಂದ ಉಪಕಾರವಾಗಿರುವುದರಿಂದ ಅನ್ವರ್ಥ ವಾದ ಹೆಸರನ್ನು ಪಡೆದಿರುತ್ತದೆ.

ಈ ಗ್ರಂಥದಲ್ಲಿ ಹನ್ನೆರಡು ಅಧಿಕಾರಗಳು ಅಥವಾ ಅಧ್ಯಾಯಗಳಿವೆ. ಮೊದಲಿನ ಎರಡು ಅಧ್ಯಾಯಗಳು ಜ್ಯೋತಿಷ್ಯಶಾಸ್ತ್ರಕ್ಕೆ ಸಂಬಂಧಿಸಿದವು. ಮನುಷ್ಯನಿಗೆ ಬೇಕಾ ಗಿರುವ ಸುಖ ಸಾಧನಗಳಾದ ವಸತಿ, ಆಹಾರ, ಆರೋಗ್ಯ, ಅಲಂಕಾರ ಇವುಗಳ ವರ್ಣನೆ ಈ ಗ್ರಂಥದಲ್ಲಿದೆ. ಮೊದಲನೆಯ ಅಧ್ಯಾಯದಲ್ಲಿ ಮನುಷ್ಯ ತನ್ನ ಸುಖ ಸಾಧನಕ್ಕೆ ಪ್ರಾರಂಭಿಸಿದ ಕೆಲಸ ಸುಸೂತ್ರವಾಗಿ ಆಗಬೇಕಾ ಗಿರುವುದರಿಂದ ಇದಕ್ಕೆ ಅವಶ್ಯವಾಗಿ ತಿಳಿಯಬೇಕಾಗಿರುವ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳೆಂಬ ದಿನ ಪಂಚಾಂಗ ಶುದ್ಧಿಯನ್ನು ವಿವರಿಸಿದೆ. ಎರಡನೆಯ ಅಧ್ಯಾಯ ಮೊದಲನೆಯದಕ್ಕೆ ಪೂರಕ; ಮೊದಲನೆಯದ ರಲ್ಲಿ ಯಾವ ಯಾವ ತಿಥಿ ವಾರ ನಕ್ಷತ್ರ ಒಳ್ಳೆಯದು ಯಾವುದು ಕೆಟ್ಟದ್ದು ಎಂದು ಹೇಳಿದ್ದರೆ, ಎರಡನೆಯದರಲ್ಲಿ ಷೋಡಶ ಕರ್ಮಗಳನ್ನು ಮಾಡುವುದಕ್ಕೆ ಶುಭಕರಗಳಾದ ತಿಥಿ ಲಗ್ನಾದಿಗಳನ್ನು ವಿವರಿಸಿದೆ. ವಿವಾಹ ಯಾವಾಗ ಮಾಡಬೇಕು, ಮಕ್ಕಳಿಗೆ ಅನ್ನ ಪ್ರಾಶನ, ಚೌಲ ಕರ್ಮ, ವಿದ್ಯಾರಂಭ ದಿನ, ಧಾನ್ಯ ಬಿತ್ತುವುದು, ಪ್ರಯಾಣಕ್ಕೆ ತಕ್ಕ ಶುಭ ಇತ್ಯಾದಿಗಳನ್ನು ವರ್ಣಿಸಿದೆ. ಈ ಎರಡು ಅಧ್ಯಾಯಗಳು ಜ್ಯೋತಿಶ್ಶಾಸ್ತ್ರವನ್ನು ಅವಲಂಬಿಸಿವೆ. ಮುಂತಾಚಾರ್ಯರು, ಶೌನಕ, ಗಾರ್ಗ್ಯ, ವರಾಹ ಇವರ ಬರವಣಿಗೆಗಳ ಮೇಲೆ ಆಧರಿಸಿವೆ.

೩ನೆಯ ಅಧ್ಯಾಯ ವಾಸ್ತು ಪ್ರಕರಣ. ಮನುಷ್ಯನಿಗೆ ಬೇಕಾಗಿರುವ ಎಲ್ಲಾ ಸುಖ ಸಾಧನೆಗಳಲ್ಲಿ ಮನೆ ಬಹುಮುಖ್ಯ. ಇದನ್ನು ಕಟ್ಟಲಾರಂಭಿಸಲಿಕ್ಕೆ ಶುಭ ತಿಥಿ ನಕ್ಷತ್ರಗಳು, ಮನೆಗೆ ಉಪಯೋಗಿಸುವ ಮರಗಳ ಜಾತಿ ಸ್ವರೂಪ, ಇದ್ದ ಮನೆಯನ್ನು ಹೆಚ್ಚಿಸುವುದಕ್ಕೆ ತಕ್ಕ ದಿಕ್ಕು, ಮನೆಯಲ್ಲಿ ಸ್ನಾನ ಅಡುಗೆ ಈ ಭಾಗಗಳಿಗೆ ಬೇಕಾಗುವ ಉದ್ದಗಲಗಳ ಪ್ರಮಾಣ, ಬಾಗಿಲ್ವಾಡವನ್ನು ನಿಲ್ಲಿಸುವುದಕ್ಕೆ ತಕ್ಕ ಶುಭ ದಿನ ಇತ್ಯಾದಿ, ಅರಮನೆಯ ಬಗೆಗೂ ಸ್ವಲ್ಪ ವಿವರಣೆ ಇದೆ.

೪ನೆಯ ಅಧ್ಯಾಯ ಉತ್ಪಾತ ಅಧ್ಯಾಯ. ಲೋಕ ದೊಳಗೆ ಮನುಷ್ಯನ ಅನ್ಯಾಯದಿಂದ ಪಾಪ ಹೆಚ್ಚುವುದು. ಪಾಪ ಹೆಚ್ಚುವುದರಿಂದ ದೈವ ವಿಮುಖವಾಗುವುದು. ಆ ದೇವತಾ ಕ್ಷೋಭೆಯಿಂದ ಅಪಾಯ ಹುಟ್ಟುವುದು. ಆ ಅಪಾಯಗಳು ಮೂರು ತರ: ದಿವ್ಯ, ಅಂತರಿಕ್ಷ, ಭೌಮ್ಯ. ದಿವ್ಯ ಎಂದರೆ ತಾರೆಗಳ ಮತ್ತು ಗ್ರಹಗಳಲ್ಲಿ ತೋರುವ ವಿಕಾರ. ಆಕಾಶದಲ್ಲಿ ತೋರುವ ವಿಕಾರ ಚಂಡಮಾರುತ, ಸಿಡಿಲು, ಮಿಂಚು, ಗುಡುಗು. ಭೂಮಿಯಲ್ಲಿ ತೋರುವ ವಿಕಾರಗಳು (ಭೂಕಂಪ), ಯಾವಾಗಲೂ ಬತ್ತದಿರುವ ಕೆರೆ ಬತ್ತುವುದು, ನದಿ ನೀರು ಮೇಲ್ಗಡೆಗೆ ಏರುವುದು, ನೀರಿನಲ್ಲಿ ಉರಿ ತೋರುವುದು ಇವೇ ಮೊದಲಾದವು. ನೀರಿನ ವಿಕಾರದ ಉತ್ಪಾತಗಳಿಗೆ ವರುಣನನ್ನು ಪೂಜಿಸಿ ಜಪ ಹೋಮಾದಿಗಳನ್ನು ಮಾಡಿಸಬೇಕು. ಇವನ್ನೆಲ್ಲ ನಂಬಲಿಕ್ಕೆ ಆಗುವುದಿಲ್ಲ ಎನ್ನುವವರಿಗೆ ಆಂಧ್ರದಲ್ಲಿ ಕೆಲವು ವರ್ಷಗಳ ಹಿಂದಿನ ಚಂಡಮಾರುತ ಒಳ್ಳೆಯ ಉತ್ತರ. ಆಗ ಸಮುದ್ರದಲ್ಲಿ ಉರಿಯನ್ನು ನೋಡಿದವರು ವರ್ಣಿಸಿ ದ್ದಾರೆ.

೫ನೆಯ ಅಧ್ಯಾಯ ಉದಕಾರ್ಗಳ. ಜೀವನಕ್ಕೆ ನೀರು ಅತ್ಯವಶ್ಯಕ. ಈಗ ಈ ನೀರು ಸಾಕಾಗದೆ ಹೋಗುತ್ತಿದೆ. ಆದ್ದರಿಂದ ಭೂಮಿಯ ಕೆಳಗೆ ಇರುವ

ನೀರನ್ನು ಹುಡುಕುವುದು ಅನಿವಾರ್ಯ. ಅದಕ್ಕೆ ಸಹಾಯ ಮಾಡುವ ಈ ಅಧ್ಯಾಯ ಎಷ್ಟು ಉಪಯುಕ್ತವೆಂದು ಬೇರೆ ಹೇಳಬೇಕಾಗಿಲ್ಲ. ನೀರು ಎಷ್ಟು ಪ್ರಮಾಣದ ಕೆಳಗೆ ದೊರಕುವುದು, ದೊರಕುವ ನೀರಿನ ರುಚಿ ಎಂತಹದು, ಬಾವಿ ತೋಡುವಾಗ ಕೆಳಗಡೆ ಬಂಡೆ ಅಡ್ಡವಾದರೆ ಅದನ್ನು ಮೃದುಮಾಡುವುದು ಹೇಗೆ, ಕಲ್ಲನ್ನು ಸೀಳುವ ಉಳಿಗಳನ್ನು ವಜ್ರದಂತೆ ಗಟ್ಟಿ ಮಾಡುವ ಕ್ರಮ, ಇವೆಲ್ಲವನ್ನೂ ಹೇಳಿರುವನು.

ಎಂಥಲ್ಲಿ ನೀರು ಸಿಗುವುದು? ಇದಕ್ಕೆ ಉತ್ತರ, ಮರಗಳು ಚಿಗುರಿ ಸೊಂಪಾಗಿ ಬೆಳೆದಿರುವ ಸ್ಥಳದಲ್ಲಿ ನೀರು ಸಿಕ್ಕುವುದು. ಮರಗಳು ಒಣಗಿ ಬಿದ್ದ ಸ್ಥಳದಲ್ಲಿ ಸಿಗುವುದಿಲ್ಲ. ಸುತ್ತಲೂ ಹುಲ್ಲಿಲ್ಲದ ಬಯಲಿನಲ್ಲಿ ಹುಲ್ಲು ಬೆಳೆದಿರುವ ಸ್ಥಳ, ಹುಲುಗಿಲು ಮರಗಳು ಬೆಳೆದಿರುವ ಸ್ಥಳದಲ್ಲಿಯೂ ಕೆಂಪು ಚಿಗುರುಗಳು ಮರಗಳಲ್ಲಿ ತೋರುವ ಸ್ಥಳದಲ್ಲಿಯೂ ನೀರು ಸಿಕ್ಕುತ್ತದೆ.

ಒಂದು ಸ್ಥಳದಲ್ಲಿ ಬೆಳೆದಿರುವ ಮರಗಿಡಗಳ ಜಾತಿ ವಿಶೇಷ, ಬೆಳೆದಿರುವ ಸ್ವರೂಪ—ಇವುಗಳ ಪ್ರಕಾರ ಆ ಸ್ಥಳಕ್ಕೆ ಇಷ್ಟಿಷ್ಟು ಹಸ್ತ ಪ್ರಮಾಣ ದೂರದಲ್ಲಿ ನೀರು ಸಿಕ್ಕುವುದು.

ಕೇಂದ್ರ ಸರ್ಕಾರದಲ್ಲಿ ಭೂಗರ್ಭ ಜಲವನ್ನು ಕಂಡು ಹಿಡಿಯಲು ಒಂದು ಶಾಖೆಯಿರುವುದು. ಅದರಲ್ಲಿ ಕೆಲಸ ಮಾಡುವವರು ಚಾವುಂಡರಾಯನ ಹೇಳಿಕೆಗಳ ಸತ್ಯಾಸತ್ಯತೆಯನ್ನು ಪ್ರಯೋಗಗಳಿಂದ ಕಂಡುಹಿಡಿಯಬೇಕು.

೬ನೆಯ ಅಧ್ಯಾಯ ವೃಕ್ಷಾಯುರ್ವೇದದ ಪ್ರಕರಣ. ಮನುಷ್ಯನ ಆಹಾರಕ್ಕೂ ಅಲಂಕಾರಕ್ಕೂ ಅತ್ಯಾವಶ್ಯಕವಾದ ಫಲಪುಷ್ಪ ವೃಕ್ಷಲತೆಗಳನ್ನು ಬೆಳೆಸುವ ಕ್ರಮ ಮತ್ತು ಹೆಚ್ಚು ಫಲ ಬರುವಂತೆ ಮಾಡುವ ಕ್ರಮ, ಮರಗಳನ್ನು ಬಿತ್ತುವಾಗ ಮತ್ತು ನಾಟುವಾಗ ಗುಳಿಗಳ ಅಂತರ, ಗಿಡಮರಗಳಿಗೆ ಬರುವ ರೋಗಗಳಿಗೆ ಔಷಧಿ—ಇವುಗಳನ್ನು ಹೇಳಿ ಕೆಲವು ಸಂಸ್ಕಾರಗಳನ್ನು ಮಾಡಿದರೆ ಫಲ ಬಿಡುವುದರಲ್ಲಿ ಕೆಲವು ಆಶ್ಚರ್ಯಕರವಾದ ಪರಿಣಾಮಗಳಾಗುವುವು ಎನ್ನುತ್ತಾನೆ.

(೧) ಒಂದು ಮರದ ಕೊಂಬೆಯನ್ನಾಗಲೀ ಬೀಜವನ್ನಾಗಲೀ ಸಮನಾಗಿ ಸೀಳಿ, ಸೇರಿಸಿ ಕಟ್ಟಿ, ತುಪ್ಪ, ಜೇನುತುಪ್ಪ ಇವನ್ನು ಚೆನ್ನಾಗಿ ಬಳಿದು ನೆಟ್ಟರೆ ಒಂದೇ ಬುಡದ ಮರದಲ್ಲಿ ಎರಡು ಬಗೆಯ ಹಣ್ಣುಗಳು ಬಿಡುವುವು. (ಈಗ ಬೋಗನ್‌ವೇಲ್‌ನಲ್ಲಿ ಎರಡು ಬಗೆಯ ಹೂವು ಬಿಡುವುದು ಗೊತ್ತಿದೆ.)

(೨) ಹಣ್ಣಿನಲ್ಲಿ ಬೀಜ ಇಲ್ಲದ ಹಾಗೆ ಮಾಡುವುದು ಸಾಧ್ಯವಂತೆ. ಈಗ ದ್ರಾಕ್ಷಿ, ಪಪ್ಪಾಯಿಗಳಲ್ಲಿ ಹೀಗೆ ಮಾಡಿದ್ದಾರೆ.

೭ನೆಯ ಅಧ್ಯಾಯ ಸುಗಂಧ ವಾದ. ಮನುಷ್ಯರ ಆರೋಗ್ಯಕ್ಕೂ ಉಲ್ಲಾಸಕ್ಕೂ ವಿರೋಧಿಯಾದ ದುರ್ಗಂಧವನ್ನು ಹೋಗಲಾಡಿಸಿ ಸುಗಂಧವನ್ನುಂಟುಮಾಡುವ ವಸ್ತುಗಳನ್ನು ತಯಾರಿಸುವ ಕ್ರಮ ಈ ಅಧ್ಯಾಯದಲ್ಲಿ ಹೇಳಿದೆ. ಬಾಯಿ ಮುಕ್ಕಳಿಸುವ ಸುಗಂಧಜಲ, ಬಗೆಬಗೆಯ ಪರಿಮಳ ತೈಲ, ದೇಹಧೂಪ, ವಸ್ತ್ರಧೂಪದ್ರವ್ಯಗಳು, ಬಗೆಬಗೆಯ ಊದುಬತ್ತಿ, ದಶಾಂಗ ಧೂಪ,ತಗಣೆ, ಸೊಳ್ಳೆ ಮೊದಲಾದ ಕಚ್ಚುವ ಕ್ರಿಮಿಗಳನ್ನು ನಿವಾರಿಸುವ ಧೂಪ, ಹೂವುಗಳ ದ್ರವವನ್ನು ಸಂಗ್ರಹಿಸುವ ಕ್ರಮ, ಕಸ್ತೂರಿಯ ವಾಸನೆಯನ್ನು ಪಡೆವ ಕ್ರಮ, ಹೂವುಗಳಿಗೆ ಸುವಾಸನೆ ಹೆಚ್ಚಿಸಲು ಧೂಪ ಮಾಡುವ ಕ್ರಮ, ಇವುಗಳನ್ನು ಹೇಳಿ, ಕೃತ್ರಿಮ ಕುಂಕುಮ ಕೇಸರಿ, (V, 63), ಕೃತ್ರಿಮ ಕಸ್ತೂರಿ (V, 65), ಕರ್ಪೂರ (V, 67), ಕೃತ್ರಿಮ ಇಂಗು (V, 68–69), ಇವುಗಳನ್ನು ತಯಾರಿಸುವ ಕ್ರಮಗಳನ್ನು ಹೇಳಿದ್ದಾನೆ.

೮ನೆಯ ಅಧ್ಯಾಯ ಸೂಪ ಶಾಸ್ತ್ರ. ಅನ್ನವನ್ನು ಕೆಲವು ದಿನಗಳವರೆಗೆ ಕೆಡದಂತಿಡುವ ಕ್ರಮ. (P 120 V 3), ಸತ್ವಕಾರಿಯಾದ ಆಹಾರ (121 V 6-8, 10) ಇಡ್ಡಲಿಗೆ (V, 11), ಲಡ್ಡು, ಮಾಂಸ, ಮೀನುಗಳ ಭಕ್ಷ್ಯಗಳನ್ನು ತಯಾರಿಸುವ ವಿಧಾನ, ಸಂಡಿಗೆ, ಹಾಗಲಕಾಯಿ ಇತ್ಯಾದಿಗಳಲ್ಲಿ ಕಹಿ ನಿವಾರಿಸುವ ಕ್ರಮ ಇಲ್ಲಿ ಹೇಳಿದೆ.

ಹಣ್ಣುಗಳ ರಸವನ್ನು ದ್ರವಿಯಿಸುವ ಕ್ರಮ, ಸಕ್ಕರೆ, ಸುವಾಸನೆ ತುಪ್ಪ (129V, 40; 130V, 41) ಸುವಾಸನೆ ಬೆಣ್ಣೆ (V, 42), ಕೃತ್ರಿಮ ಹಾಲು (V, 45) ಕೃತ್ರಿಮ ಮೊಸರು (V, 48-49) ಈ ಕ್ರಮಗಳನ್ನು ಹೇಳಿದ್ದಾನೆ.

೯ನೆಯ ಅಧ್ಯಾಯ : ನರವೈದ್ಯ, ಸ್ತ್ರೀವೈದ್ಯ, ಬಾಲ ವೈದ್ಯ, ಗೋ ಅಶ್ವ ಗಜ ವೈದ್ಯ.

ಮೊರಾರ್ಜಿ ದೇಸಾಯರ ಔಷಧಿಯನ್ನು ಜ್ವರಕ್ಕೆ, ಗೋಮೂತ್ರದಲ್ಲಿ ಬನ್ನಿಯ ಬೀಜ ಅರೆದು ಉಪಯೋಗಿಸುವುದು ಮುಖಕಾಂತಿ ಹೆಚ್ಚಿಸುವುದಕ್ಕೆ.

ವಿಷಮಜ್ವರ (೧೪೦), ಕ್ಷಯ (೧೪೩), ಇವುಗಳಿಗೆ ಸುಲಭ ಚಿಕಿತ್ಸೆ. ಆಯುಷ್ಯ ವರ್ಧನ (೧೪೫), ಬುದ್ಧಿ ಪೆರ್ಚುವುದು (೧೪೬), ವೀರ್ಯವೃದ್ಧಿ (೧೪೭), ನರೆ ಕಪ್ಪಾಗುವುದಕ್ಕೆ (೧೪೮), ತೊನ್ನು (೧೫೨), ನೆತ್ತರು ಹೊಡಗೆ (೧೫೨; ರಕ್ತದಒತ್ತಡ?), ಮೂಲವ್ಯಾಧಿ, ಅತಿ ಕ್ರೂರವಾದ ವ್ಯಾಧಿಗಳಾದ ಕ್ಷಯ ಮುಂತಾದುವುಗಳಿಗೆ ಬಹು ಸುಲಭವಾದ ಔಷಧಿಯನ್ನು ಹೇಳಿರುವುದರಿಂದ ಅವು ಪರೀಕ್ಷಾರ್ಹ.

ಸ್ತ್ರೀವೈದ್ಯದಲ್ಲಿ ಗರ್ಭ ನಿಲ್ಲುವುದಕ್ಕೆ ಹೇಳಿರುವ ಈತನ ಕೆಲವು ಉಪಾಯಗಳು ಬೆಳೆಯುತ್ತಿರುವ ಜನ ಸಂಖ್ಯೆಯನ್ನು ಕಡಿಮೆ ಮಾಡಲು ಆಸ್ಥೆ ವಿಶೇಷವಾಗಿರುವ ಈ ದಿನಗಳಲ್ಲಿ ಪರೀಕ್ಷೆಗೆ ಯೋಗ್ಯವಾಗಿದೆ (೧೭೯-೧೮೦). ಶಿಶುವೈದ್ಯದಲ್ಲಿ ಅವುಗಳ ದೃಷ್ಟಿ ಪರಿಹಾರಕ್ಕೆ ತಾಯಿತಗಳನ್ನು ಕಟ್ಟಲು ಹೇಳುತ್ತಾನೆ. ಬೇರೆ ಕಡೆ ತಾಯಿತ ಹೇಳದಿರುವುದು ಗಮನಾರ್ಹ. ಹಲ್ಲು ಬೇಗ ಬರಲಿಕ್ಕೆ, ಅತಿಸಾರಕ್ಕೆ ಔಷಧಿ ಹೇಳಿದ್ದಾನೆ.

ಪಶುವೈದ್ಯದ ಬಗ್ಗೆ ನಾನು ಏನೂ ಹೇಳುವುದಿಲ್ಲ. ಆದರೆ ಪಶುವೈದ್ಯರು ಇದನ್ನು ಅವಶ್ಯ ಓದಬೇಕೆಂದು ಮಾತ್ರ ಹೇಳುತ್ತೇನೆ.

೧೦ನೆಯ ಅಧ್ಯಾಯ: ವಿಷತತ್ವ ಪ್ರಕರಣದಲ್ಲಿ ಎಲ್ಲಾ ತರಹ ವಿಷಸ್ವರೂಪಗಳನ್ನೂ ಹೇಳಿ, ಕೆಲವು ಪ್ರಾಣಿಗಳು ಕಚ್ಚಿದರೆ ಔಷಧ ಹೇಳಿದ್ದಾನೆ. ಉದಾ. ಹಾವು ಕಚ್ಚಿದರೆ ವಿಷ ಹಬ್ಬದ ಹಾಗೆ ಔಷಧಿಯನ್ನು, ನಾಯಿ ಕಚ್ಚಿದರೆ ನಂಜು ಆಗದ ಹಾಗೆ ಔಷಧಿಯನ್ನು ಹೇಳಿದ್ದಾನೆ. ಹಾವು ಕಚ್ಚಿದರೆ ಮಂತ್ರವನ್ನು ಹೇಳಬೇಕೆನ್ನುತ್ತಾನೆ. ಜತೆಗೆ ಔಷಧಿಯನ್ನು ಹೇಳುತ್ತಾನೆ (೨೦೧-೨೦೩).

೧೧ನೆಯ ಅಧ್ಯಾಯ : ಸರ್ವಲಕ್ಷಣ ಪರಿಜ್ಞಾನ ಪ್ರಕರಣ. ಇದರಲ್ಲಿ ಸ್ತ್ರೀಪುರುಷ ಗಜಾಶ್ವ ಗೋಶುನಕ ಅಜ ಕುಕ್ಕುಟ ಸ್ತ್ರೀಪುರುಷ ಅವಯವಗಳು ಹೇಗೆ ಇದ್ದರೆ ಯಾವುದನ್ನು ಸೂಚಿಸುತ್ತದೆ ಎನ್ನುವುದನ್ನು ಇಲ್ಲಿ ಹೇಳುತ್ತಾನೆ. ಹಸ್ತಸಾಮುದ್ರಿಕವನ್ನೂ ಹೇಳುತ್ತಾನೆ. ಇಷ್ಟವಿರುವವರು ಇದನ್ನು ಓದಬಹುದು.

೧೨ನೆಯ ಅಧ್ಯಾಯ ಶಕುನ ಪ್ರಕರಣ. ಸಾಮಾನ್ಯ ಶಕುನಗಳು, ಬೆಕ್ಕು, ಪಕ್ಷಿ, ಹಲ್ಲಿ ಮೊದಲಾದ ಶಕುನಗಳನ್ನು ಹೇಳಿದೆ. ಇಂಥ ಮೂಢ ನಂಬಿಕೆಗಳು ಎಲ್ಲಾ ಜನರಲ್ಲಿಯೂ ಇವೆ.

**ಲೋಕೋಪಕಾರದ ಮಹತ್ವ :** ಲೋಕೋಪಕಾರದಲ್ಲಿ ಮೂಢನಂಬಿಕೆಗಳು ಕಡಿಮೆ. ಚಿಕಿತ್ಸಿಕ ಬುದ್ಧಿ, ಪ್ರಯೋಗಶೀಲತೆ ಹೆಚ್ಚಾಗಿ ಕಾಣುತ್ತದೆ. ಬರಬರುತ್ತ ನಮ್ಮ ಜನರಲ್ಲಿ ಈ ಒಳ್ಳೆಯ ಗುಣಗಳು ಕಡಿಮೆಯಾದವು ಅಥವಾ ಹೋಗೇ ಹೋದವು ಅಂತ ಕೂಡ ಹೇಳಬಹುದು. ಸು. ೧೨೦೦ರಲ್ಲಿ ಬರೆದ ಕಡೆಯ ವಿಶ್ವಕೋಶವಾದ ಶಿವತತ್ವರತ್ನಾಕರದಲ್ಲಿ ವಿಷಯ ಸಂಗ್ರಹ ಅಪಾರವಾಗಿದ್ದರೂ ಮೇಲೆ ನಾವು ಲೋಕೋಪಕಾರದಲ್ಲಿ ಕಂಡಂಥ ಪ್ರಯೋಗಶೀಲಗಳನ್ನು ಕಾಣುವುದಿಲ್ಲ. ಲೋಕೋಪಕಾರ ಬರೆದ ಕಾಲದಲ್ಲಿ ಮತ್ತು ಅದರ ಹಿಂದೆ ನಮ್ಮ ಜನರು ವಿಜ್ಞಾನದಲ್ಲಿ ಮಾಡಿದ ಪ್ರಯೋಗಗಳನ್ನು ಅರಬ್ಬರು, ಚೀನಿಯರು ನಮ್ಮಿಂದ ಕಲಿತುಕೊಂಡರು. ಅವರಿಂದಲೂ ಕಲಿಯಲು ನಾವು ಹಿಂಜರಿಯುತ್ತಿರಲಿಲ್ಲ. ವರಾಹಮಿಹಿರ ಹೇಳುತ್ತಾನೆ. ನಮ್ಮ ದೇಶದಲ್ಲಿ ಮಾತ್ರ ಋಷಿಗಳಿಲ್ಲ, ಬೇರೆ ದೇಶದಲ್ಲಿಯೂ ಋಷಿಗಳಿದ್ದಾರೆ. ಅವರಿಂದ ನಾವು ಕಲಿಯುವುದು ತಪ್ಪಲ್ಲ. ಈತನು ರೋಮಕ ಸಿದ್ಧಾಂತವನ್ನು ಬರೆದು ನಮ್ಮ ಜನರಿಗೆ ಗ್ರೀಕ್ ಖಗೋಲ ವಿಜ್ಞಾನದ ಪರಿಚಯ ಮಾಡಿಕೊಟ್ಟ. ಕ್ರಮೇಣ ನಮ್ಮ ಜನರಲ್ಲಿ ಒಂದು ತರಹ ಅಹಂಕಾರ ಬಂದು ಚಿಕಿತ್ಸಿಕ ಬುದ್ಧಿ ಕಳೆದುಕೊಂಡೆವು. ನಾವು ಬುದ್ಧಿವಂತರು. ಇತರರು ಮ್ಲೇಚ್ಛರು, ಅವರಿಂದ ನಾವು ಕಲಿಯತಕ್ಕದ್ದೇನೂ ಇಲ್ಲ ಅನ್ನುವ ಭಾವನೆ ಬಂತು. ಈ ಭಾವನೆ ಇನ್ನೂ ಇಲ್ಲದೆ ಇದ್ದ ಕಾಲದಲ್ಲಿ ಬರೆದದ್ದು ಲೋಕೋಪಕಾರ. ಇದರ ಅನೇಕ ಭಾಗಗಳಲ್ಲಿ ಹೇಳಿರುವ ಪ್ರಯೋಗಗಳನ್ನು ಮಾಡಿ ಅವುಗಳ ಸತ್ಯಾಸತ್ಯತೆಯನ್ನು ನಾವು ಕಂಡುಕೊಳ್ಳಬೇಕು.